# ಅಂತರಂಗ

ಎಂ. ಕೆ. ಶಂಕರನಾರಾಯಣಭಟ್



ಭಾವನಾ ಪ್ರಕಾಶನ
...ಉಪಾಧ್ಯಾಯ ವಸತಿ
...ಸ್ ಕಾನ್ವೆಂಟ್ ಹೈಸ್ಕೂಲ್, ಮಂಡ್ಯ.

ಅಮ್ಮೊಂಬ೪

# ಅಂತರಂಗ

(ಭಾವ ಕವನ ಸಂಕಲನ)


**ಎಂ. ಕೆ. ಶಂಕರನಾರಾಯಣಭಟ್**

ಸೈಂಟ್ ಜೋಸೆಫ್ಸ್ ಕಾನ್ವೆಂಟ್ ಹೈಸ್ಕೂಲ್, ಮಂಡ್ಯ.



**ಭಾವನಾ ಪ್ರಕಾಶನ**

ಉಪಾಧ್ಯಾಯ ವಸತಿ

ಸೈಂಟ್ ಜೋಸೆಫ್ಸ್ ಕಾನ್ವೆಂಟ್ ಹೈಸ್ಕೂಲ್, ಮಂಡ್ಯ.

'ANTARANGA' — A collection of Kannada poems by M. K. Shankaranarayana Bhat St. Joseph's Convent High School, Mandya.







**Price : Rs 1-50**

*Printed at*

Sudha Power Press, Mandya.

*Published by*

M. K. Shankaranarayana Bhat

St. Joseph's Convent High School, Mandya.

# ಅಂತರಂಗದೊಳಗೇನು ?

ಮುದ್ರಣ ಅಚಾತುರ್ಯದಿಂದ "ಬನ್ನಿ ಒಂದಾಗಲು" ಎಂಬ ಕವಿತೆ ಎರಡು ಬಾರಿ ಕಾಣಿಸಿಕೊಂಡಿದೆ ವಾಚಕರು ಕ್ಷಮಿಸಬೇಕಾಗಿ ಪ್ರಾರ್ಥನೆ.

# ಲೇಖಕನ ಮಾತು

ಈ "ಅಂತರಂಗ"ವು ಸಂದರ್ಭೋಚಿತವಾಗಿ ಮೂಡಿಬಂದಿರುವ ಭಾವನೆಗಳ ಲಿಪಿ ವಿನ್ಯಾಸ. ಇಲ್ಲಿಯ ಹಲವು ಕವನಗಳು 'ಜೀವನ' ವಿನೋದ' ಮೊದಲಾದ ಪತ್ರಿಕೆಗಳಲ್ಲಿ ಈಗಾಗಲೇ ಬೆಳಕು ಕಂಡವು. ಸುಮಾರು ನಾಲ್ಕೈದು ವರ್ಷಗಳಿಂದ ಒಂದೊಂದಾಗಿ ಸೇರಿಕೊಂಡು ಈ ಸಂಕಲನವಾಗಿದೆ. ಇಲ್ಲಿ ಪೂರ್ಣ ನವ್ಯ ಮಾರ್ಗವಿಲ್ಲ. ಅಂತರಂಗದ ಮಿಡಿತ ಸಹೃದಯನ ಹೃದಯಕ್ಕೆ ಅರಿವಾಗಬೇಕು. ಅದಕ್ಕೆ ಪ್ರಶಸ್ತವಾದ 'ನವ್ಯತೆ' ಯನ್ನು ಇಲ್ಲಿ ಬಳಸಿದ್ದೇನೆ. ಶಬ್ದದಿಂದ ಇಂದ್ರಜಾಲ ತೋರಿಸುವ ಪ್ರಯತ್ನ ಇಲ್ಲಿಲ್ಲ. ಭಾವನೆಯ ವಿಕಾಸ, ಆ ವಿಕಾಸದ ಲಿಪಿ ವಿನ್ಯಾಸ – " ಈ ಅಂತರಂಗ" ಸಾಮಾನ್ಯ ಕನ್ನಡಿಗನೊಬ್ಬನ ಹೃದಯದಲ್ಲಿ ಏಳಬಹುದಾದ ಭಾವನೆಗಳೇ ವಿಶಿಷ್ಟ ಸನ್ನಿವೇಶಗಳಲ್ಲಿ ಆವಿರ್ಭವಿಸಿರುವ ಕಾರಣದಿಂದ ಇಲ್ಲಿ ಕವನಗಳಾಗಿವೆ.

ಈ ಪುಸ್ತಕ ಮುದ್ರಣಗೊಂಡು ಪ್ರಕಾಶವಾಗಲು ಸಹೃದಯ ಗೆಳೆಯರಾದ ಶ್ರೀ ಬಿ. ಗಣಪತಿಭಟ್‌ರವರು ಹಾಗೂ ವಿಜಯ ಬ್ಯಾಂಕಿನ ಗೆಳೆಯರು ಕಾರಣ. ಅವರಿಗೆ ಹಾರ್ದಿಕ ವಂದನೆಗಳು. ಮುದ್ರಣ ಕಾರ್ಯವನ್ನು ಅಂದವಾಗಿ ನೆರವೇರಿಸಿಕೊಟ್ಟ ಸುಧಾಪವರ್ ಪ್ರೆಸ್ ಮಾಲೀಕರಾದ ಗೆಳೆಯ ಶ್ರೀ ಅಲ್ಫಾನ್ಸ್‌ರಾಡ್ರಿಕ್ಸ್ ಮತ್ತು ಅವರ ಸಿಬ್ಬಂದಿ ವರ್ಗದವರಿಗೂ ಪ್ರತ್ಯೇಕ ವಂದನೆಗಳು. ನನ್ನ ಕಾರ್ಯದಲ್ಲಿ ನೆರವಾದ ಇತರ ಸಹೃದಯರಿಗೂ ವಂದನೆಗಳನ್ನು ಸಲ್ಲಿಸಿ, ಅಪಾರವಾದ ನನ್ನ ನಾಡಿನ ಕನ್ನಡ ಜನತೆಯ ಪ್ರೀತಿಯ ಮಡಿಲಲ್ಲಿ ಈ ಪುಸ್ತಕವನ್ನು ಸಮರ್ಪಿಸುತ್ತಿದ್ದೇನೆ.

ಸಜ್ಜನ ವಿಧೇಯ



ಸರಸೇ ರಸಿಕನ ಮಾಡೌ
ಕರಂಗಳಂ ಮುಗಿದ ನತಸಿರಸ್ಕನನೆನ್ನಂ
ಮರೆಯದೆ ಪಾಲಿಸು ವರಮಂ
ಪೊರೆ ಶಾರದೆ ವರದೆ ದೇವಿ ವಾಗ್ವಿಲಸನದಿಂ

—ಶಂ.

# ಮತ್ತೆ ನೀನೆತ್ತಿಕೊಳುವೆ - !

ಬಾದೇವಿ ಏಕಿಂತು ದೂರವಿರುವೆ
ಬಂದೆನ್ನ ಬಳಿಸುಳಿಯೆ ಏಕಂಜುವೆ!
ನಾನೇನ ಗೈವೆ ನೀನಿಲ್ಲಿ ಬಂದು ಸುಳಿಯೆ
ಎನ್ನೊಳೇನಿದೆ ಶಸ್ತ್ರ ಬರಿದೆ ಭ್ರಮೆಯೇ

ಇದ್ದರೂ ಇರಬಹುದು, ಇದ್ದಲಿನ ಚೂರು
ಬರೆವೆ ನೇನದರಲ್ಲಿ ಗೊಡ್ಡು ಗೀರು
ಸರಸ ಪಾನೀಯ ದೌತಣವು ಸಿಗದು
ಸುರಸಹಾಸದ ಮಾತು ಸಿಕ್ಕಲೂ ಬಹುದು

ಹಾಡಿದರು ಹಾಡಿದೆ; ನೀ ಹಾಡೆ ನನ್ನೊಳಗೆ
ಬರೆದರೂ ಬರೆದೆ ಹಾಳೆಯೊಳಗೆ
ನಿನ್ನ ರೂಪನು ನೋಡಿ ನಿನ್ನ ನಗೆ ಗ್ರಹಿಸಿ
ನೀನೆ ಮತ್ತದನು ಕೈಯಲೆತ್ತಿಕೊಳುವೆ

ಆಗಾಗ ಬರುತಲಿರು ಎನ್ನ ಮನವಾಸಿ
ಪಟ್ಟಣದಿ ನಾನಿರಲು ನೀನು ಬನವಾಸಿ

# ನಮ್ಮ ನುಡಿಗಾರು ಮತ್ತೆ ದಿಕ್ಕು ?

ಕನ್ನಡದ ದುಃಸ್ಥಿತಿಯ ಕಣ್ಣಾರೆ ಕಂಡೆನಗೆ
ಕಣ್ಣೀರು ಉಕ್ಕುತಿದೆ ನಿಜಕು ತಾಯೆ!
ನಿನ್ನವರು ತಮ್ಮದೇ ಆದ ನೀತಿಯನಿನ್ನೂ
ರೂಢಿಸಲು ಆತುರವ ಪಡುವುದಿಲ್ಲ.

ನಿಂತಲ್ಲೆ ನಿಂತು ; ಕುಳಿತಲ್ಲೆ ಕುಳಿತು ; ಸಾಕೆಂಬ
ಭಾವನೆಯ ನಿನ್ನೂ ದೂರಮಾಡಿಲ್ಲ
ಹರಿದು ಹೋಗಿಹ ಕರೆಯಕುರಿತಿನಿತಿಲ್ಲ
ಬೇಸರವೊ, ಕೊರಗೊ, ದುಃಖ.

ಎಲ್ಲೆಲ್ಲು ಬಿರುಗಾಳಿ ತೆರದಿಂದ ಸಾಗುತಿದೆ
'ತಮ್ಮತನ' ತೋರಿಸುವ ಸತ್ಯಾಗ್ರಹ!
ನಾಮ ಫಲಕಗಳಲ್ಲೋ ಅಂಗಡಿಯ ಬೀದಿಯಲೋ
ಎಲ್ಲೆಲ್ಲು ತಮ್ಮ ನುಡಿಯೇ ಬೆಳಗಲೆಂಬ

ಔನತ್ಯ ಅಭಿಮಾನ ಸಾರಿಹೇಳುವ ಕೃತಿಯು
ಇಂದು ದಶದಿಶೆಗಳಲಿ ಕಣ್ಣು ಕುಕ್ಕುತಿದೆ
ಜಡಭರತರಂತಿಂದು ಸುಮ್ಮನಿರೆ ನಾವೀಗ
ನಮ್ಮ ನುಡಿಗಾರು ಮತ್ತೆ ದಿಕ್ಕು ?

ಎಚ್ಚತ್ತು ಮುಂದಾಗಿ ತಮ್ಮ ನುಡಿಯನೆ ಮೆರೆದು,
ಮರೆತು ಮರೆಯುವರೆಲ್ಲ ಮಣ್ಣು ಮುಕ್ಕು .

# ರಸ್ತೆ ಕನ್ನಡದಲ್ಲಿ-
# -ಅರ್ಜಿ ಇಂಗ್ಲಿಷಿನಲ್ಲಿ

ರಸ್ತೆಗಳಿಗೆಲ್ಲ ಕವಿಗಳ ಹೆಸರು
ಮಂತ್ರಿಗಳಿಗೂ 'ದೇಸೀಯ ನಾಮ'
ಮದುವೆ ಮುಂಜಿಯಲಿ ನಮ್ಮದೇ ಗಾನ
ಹಾಕಿ ಕುಣಿದರು ವೇಷ–ಯಕ್ಷಗಾನ

'ಆಗಲೇಬೇಕು' ಶುದ್ಧ ಕನ್ನಡನಾಡು
'ತೊಲಗಲೇಬೇಕು' ಅನ್ಯಭಾಷೆಯ ಕಾಡು,
"ಇದೊ ಕೊಳ್ಳಿ" - ರನ್ನ, ಪಂಪ, ಜನ್ನ, ಪೊನ್ನ ;
"ರಸ್ತೆಗಳು ಮಾತ್ರ"–ಇನ್ನೇನಿಲ್ಲ

ಆ ಕವಿಗಳಮರ ಕಾವ್ಯವ ಕಂಡುದಾರು ?
ಅವರ ಜ್ಞಾನವ ಹರಡಿಹರು ಯಾರು ?
ಕುಳಿತಲ್ಲಿ ನಮಗೆಲ್ಲ 'ಆಗಬೇಕು'
"ಕೈಗೆ ಬರುವರ್ಜಿಗಳು ಇಂಗ್ಲೀಷಿನಲ್ಲಿರಬೇಕು"

ಇಂಗ್ಲೀಷೊ ? ಕನ್ನಡವೊ ? ಅಭಿಮಾನ ಬೇಕಿಲ್ಲ
ಮುಂದುವರಿದರ ಹೀಗೆ ಮತ್ತೇನು ಸಲ್ಲ



# ಬಾಳುವನು ಹಿರಿಯನಾಗಿ

ನೋಡಲ್ಲಿ ಹೊಲದಲ್ಲಿ, ಉಳುವವನನು
ನಿಜಕು ನಮ್ಮಯ ಜೀವದಾನಿಯವನು
ನೀಡುವನು ಋತುಮಾನ ಕಾಲದಲಿ ಬೆಳೆಯ
ಇರಿಸುವನು ಶಾಂತಿಯಲಿ ಜೀವದಿಳೆಯ

ಬೇಗುದಿಯು ಹಲವಿರಲು ನುಂಗುವನು ಅವನು
ಉಳುತಿರಲು ರಾಗದಲಿ ಉಗುಳುತಿಹನು

ಅವನಿಗೆಲ್ಲಿದೆ ಬಿರುದು 'ಪದ್ಮ' 'ರತ್ನ' ?
ಹೇಳಿ ನಿಜಕು ಯಾರು ಭಾರತದ ರತ್ನ ?
ಹಿಂದೆ ಬಾಳಿಹ ಅವನು ಮುಂದೆಯೂ ಬಾಳುವನು
ಬದುಕಿಯೂ ಬದುಕದೆಯು ನಮ್ಮ ಬದುಕುವನು

ಎತ್ತುಗಳ ಒಡನಾಟ ಅವನ ಸ್ವರ್ಗ
ಉತ್ತು ಬೆಳೆಯುವ ಭೂಮಿ ಅವನ ಕಗ್ಗ
ಮಣ್ಣಿಗಾತನೆ ನಿಕಟ ಬಂಧುವಾಗಿ
ಬಾಳುವನು ನಮಗೆಲ್ಲ ಹಿರಿಯನಾಗಿ



# ಕನ್ನಡೇತರ ವಮನ

ಬಗೆಯ ಕಣ್ಣನು ತೆರೆಸಿಹಳು ಕನ್ನಡಾಂಬೆ
ಪೀಯೂಷ ಸುರಿದವಳ ಎಲ್ಲೆಲ್ಲೂ ಕಾಂಬೆ
ನಿಂತಲ್ಲಿ ಕುಳಿತಲ್ಲಿ ಅವಳದೇ ಧ್ಯಾನ
ಪಡುತಿರಲು ಅವಳಿಂದ ಚಣಚಣಕು ಮಾನ
"ಕೈಯೆತ್ತಿ ರಕ್ಷಿಸುವೆ"ನೆಂದರೂ ಭಯವೇ"
ಇವಳಲ್ಲಿ ನಮಗಿಷ್ಟು ಅನುಮಾನವೇ?"
ಈ ಶಂಕೆ ಮಧ್ಯದಲಿ ನಿಂದು ನಡುಗುವರ
ಸಂಕಟದೆ ನೋಡುವಳು ದುರುಗುಟ್ಟಿ ಅವರ!
ತಾಯಿ ಕನ್ನಡಿತಿ ಶಕ್ತಿ ರೂಪಿಣಿಯಾಗಿ
ಅವತಾರ ತಾಳಿದರೆ ವೈವಿಧ್ಯ ಮರೆಯಾಗಿ
ರಕ್ತ ಬೀಜರ ನಾಶ; ಚಂಡಮುಂಡರ ದಮನ
ಆಗುವುದು ಸರಿಯಾಗಿ ಕನ್ನಡೇತರ ವಮನ



# ಹೂವರಳೆ - ಮನವರಳದೇ ?

'ಬೆಳೆಯಬೇಕೆಂ'ಬುದೇ ಯುಗದ ಮಂತ್ರ,
'ಬೆಳೆಸಿರೆಂ'ಬುದೇ ನಮ್ಮ ಸರಕಾರ ತಂತ್ರ ;
"ಕೃಷಿಯೇ ರಾಷ್ಟ್ರದ ಜೀವ" ರೈತರಿಗೆ ಯಂತ್ರ
ಇಂದು ಕರ್ಷಕ ಜನರ ಏಳ್ಗೆ ಮಂತ್ರ.
ಗಿಡಗಳಿಂದಲೆ ಜೀವ, ಭಾವ ಸ್ಫೂರ್ತಿ
ಪಡೆದಿಲ್ಲವೇ ವರ್ಡ್ಸ್‌ವರ್ತ್ ವಿಶ್ವ ಖ್ಯಾತಿ
ವರ್ಣಿಸಿಲ್ಲವೇ ಪಂಪ ಬನವಾಸಿ ಸೊಗಸ
ಬಿಟ್ಟಿಹನೆ ಕವಿಗುರುವು ವರ್ಣಿಸದೆ ಮನಸಾ
ಪುಟ್ಟಪ್ಪ ಮಲೆನಾಡ ಕಾಜಾಣನಲ್ಲವೇ ?
ಈ ನೋಟವಿಲ್ಲದಿರೆ ಕೋಗಿಲೆಯದೆಲ್ಲಿ ?
ಸಹ್ಯಾದ್ರಿ ಮಾತಂಗ ಬೆಟ್ಟಗಳ ನೋಟ
ಪಶ್ಚಿಮದಿ ನೀಡಿರುವ ಘಟ್ಟಗಳ ತೋಟ
ಕನ್ನಡದ ನಾಡಿಗದು ದೇವಿಯುಡುಗೆ
ಉಳಿಸೆ ನಾವಿಂದಿದನು ಪಣವ ತೊಡುಗೆ
ಹೂವು ಅರಳಿರಲು ಮನೆಯ ಸುತ್ತ
ಮನವು ಅರಳಿರದೆ ಮಾನವಗೆ ನಿತ್ಯ
ತೋಟದಿಂದಲೆ ಮನೆಗೆ ಹಿರಿಯ ನೋಟ
ಬೆಳೆಸಲೇ ಬೇಕು ; ಮನೆ ಸುತ್ತ ತೋಟ



# ಋಣದಲ್ಲಿ ಮಡಿಯಲೇಂ ?

ಸಾಲದಿಂದೆಂತು ನಾ ಮೇಲೆ ಬಹೆನು
ವಿಶ್ವಮೂರ್ತಿಯೆ ಕಾಣದೇಂ ನಿನಗೆ?
ಸಾಲವಿಲ್ಲದೆ ಸೊಗಸಿನಲೆ ಜೀವಿಸಲು
ದಾರಿಕಾಣೆನು ನಾನು ಭಜಕಪ್ರೀತ!

ನಿನ್ನ ಭಜಿಸಲು ಸಾಲ ಅನ್ನವಸನಕೆ ಸಾಲ
ಸಾಲವೇ ಜೀವವನು ಹಿಂಡುತಿದೆ ನೋಡು
ನಯನೀತಿ ಮಾತಿಗೂ ನಗೆ ದುಃಖಕೆಲ್ಲಕೂ
ಅಂಜುವುದು ಸಾಲಿಗರ ಎದುರು ಸಂತತವು

ಸಂಸಾರ ತ್ಯಜಿಸೆ 'ಮಾನವತೆ' ವರ್ಗದಲಿ
ಎಲ್ಲರೂ ನಿಂದಿಪರು 'ಹೇಡಿ'ಯೆಂದು
ಧೈರ್ಯದಿಂ ಮುಂಬರಿಯೆ ಆ ನಾಮಧೇಯವೇ
ಸಾಲದಾ ಕೋಶದಲೆ ಕಾಂಬುದಿಲ್ಲ

ತಾಳ್ಮೆಯಿಂದಿರೆ ಎಷ್ಟು ಸಹಿಸಲೊ ದೇವಾ
ಋಣದಲ್ಲಿ ಮಡಿಯಲೇಂ ದೀನಪಾಲ

# ತೋರಿಕೆಯು ಬಿಂಕ

ಬೆಳಗಾಯಿತೊ ; ಕಾಣ ಸಿಗುವುದು ಸುತ್ತೆಲ್ಲವೇಷ
ಮನುಜ ಮನುಜರ ಒಳಗೆ ಬೆಳೆದಿರುವ ದ್ವೇಷ
"ನಾನೆ ಮಾಡಿದೆನೇನೊ ಈ ಪ್ರಪಂಚ"
ಎನ್ನುವಾ ಭಾವನೆಯ ರೂಢಿ ಕೊಂಚ
ಮೈ ಬಣ್ಣವೇ ಮೇಲು ಮನ ಬಣ್ಣಕಿಂತ
ಕೋತಿವದನವೆ ಇರಲು, ಮನ್ಮಥನಿಗಿಂತ
ಒಂದಿಷ್ಟು ಹಿರಿಯತನ ತಮ್ಮದೆಂದೇ
ತೋರಿಕೆಯ ಬಿಂಕದಲಿ ದಿನವ ದೂಡುತ್ತ
ವ್ಯರ್ಥಕಳೆಯುವರಯ್ಯೊ "ಶೂನ್ಯ ಸುತ್ತ"
ಹಿರಿಯ ಹೊತ್ತಗೆಯೇನೊ ಕರದೊಳಿಹುದು
"ವೇದಾಂತ ಗ್ರಂಥ"ವದು-ರಟ್ಟು ಹೇಳುವುದು
ಅದರ ಜತೆಯಲಿ ಇಹುದು ಚರ್ಮಚೀಲವೊಂದು
ಅದರೊಳಗೆ ಶೃಂಗಾರ ಸಾಧನವೆ ಇಹುದು



# ನೋಡುವೆ

ಶಾಂತಿ ಸಾರಲು ನೀನು ಲೋಕಕಿಳಿದಿಹೆ ಹಿಂದೆ
ಇಂದಾವ ರೂಪದಲಿ ಕಾಣಿಸುವೆ ತಂದೆ!
ವೇದಗಳ ರೂಪದಲಿ ಪೂಜ್ಯಗ್ರಂಥಗಳಾಗಿ
ಅವತಾರ ತಾಳಿರುವೆ ಬೆನ್ನಹಿಂದೆ.

ಒಂದೊಂದು ಕಾಲದಲಿ ವೈವಿಧ್ಯನಾಮದಲಿ
ಮೆರೆದಿರುವೆ ನೀನೆಂಬುದೇ "ಜ್ಞಾನವಿಲ್ಲ."
ಜಾತಿ ಮತ ಪಂಥಗಳ ಹೆಸರಿನಲಿ ವೈವಿಧ್ಯ
ನೀಡಿರುವ ಉಪದೇಶ ನಮಗೆ ವಿದ್ಯೆ.

ನಮಗಿಲ್ಲ ಶತ್ರುತ್ವ, ಒಂದೆ ನಾವೆಂದೆನುತ
ಇದೊ ದೇವ ಕೇಳುವೆವು ನಿನ್ನನನವರತ
ಸಹನೆ ತ್ಯಾಗಗಳೆಂಬ ಶಾಂತಿ ವೃಕ್ಷದ ಫಲವು
ಸುಗುಣ, ದಯೆ, ಸಂತೋಷ, ವರ್ಣ ಸಂಕರವು.

ಸತ್ಯವರ್ತನೆಯದರ ಮೂಲವೆಂಬುದು ತಿಳಿದು
ಸಾರಿರುವೆ ಪಂಥ್ಯನೇ ಲೋಕವರಿಯೇ
ಪುಣ್ಯ ನಾಮನೆ ನಿನಗೆ ಆನಂದ ಹಾರೈಕೆ
ನೆಲಸೆ ಜಗ ಮನಸಿನಲಿ ನಿನ್ನ ಬಯಕೆ.

[illegible]

# ದಿನ ಒಂದೆ ತೆರದಲ್ಲಿ ಇರುವುದಿಲ್ಲ

ಮುದ್ದಾಗಿ ಕಂಡುಬಹ ಮುಖದೊಳಗೆ ಮಿನುಗುತಿಹ
  ಅವ್ಯಕ್ತ ಭಾವವನು ಅರಿತುಕೊಂಬೆ.
ತೇಜಸ್ಸು ಹೊಮ್ಮುತಿರೆ; ಭಾವನೆಯು ಸೂಸುತಿರೆ.
  ಮಾತಿನುಪಯೋಗವೇನು  ಮತ್ತೆ ?
ನಿಂತಲ್ಲಿ ನಿಂತು; ಕುಳಿತಲ್ಲಿ ಕುಳಿತು
  ಬೆನ್ನ ಹಿಂದೇ ಬರುವ ಭಾವವೇನು ?
ಎತ್ತಲೋ ನೋಡುತಿರೆ; ಮನವನಾಕರ್ಷಿಸಲು
  ಏನೇನೊ ಒಳಸಂಚು ಹೂಡುತಿರುವೆ
" ಏಕೆ ಸೃಜಿಸುವೆ ಇಂಥ ಅಸ್ಪಷ್ಟ ಕಾರ್ಯಗಳ
  ದಿನ ಒಂದೆ ತೆರದಲ್ಲಿ ಇರುವುದಿಲ್ಲ"
ಇಂದು ಈ ಭಾವ ಬಹಳ ವೈಭವದಿಂದ
  ಮೆರೆಯುತಿರೆ, ಸರ್ತಿಯಲಿ ಮುಂದಿಹುದು ಕಾದು
ಈ ಜಂಬ ತಲೆತಗ್ಗಿ, ನೋಡದೊ ಮುಂದಿರುವ
  ಸರ್ವರೂ ಬೇಕೆಂಬ ಸರ್ವ ಸಮಭಾವ.
ಎಲ್ಲವೂ ಎಲ್ಲ ದಿನ ಮೆರೆಯಲಿರುವುದೆ ಮತ್ತೆ ?
  ಅದಕೆ ಅದರದ್ದೆ ಆದೊಂದು ಸಮಯ ವಲ್ತೆ ?



# ಇನಿತೆಲ್ಲವಿದ್ದರೂ

ಗುಣವೇನು ಅಡಗಿದೆಯೊ ತಿಳಿವ ಬಗೆಯೆಂತು
ಕಾಣುವುದು ಸೌಂದರ್ಯ ಹೊರಗಡೆಯಿದಿಂತು.
ತೊಟ್ಟಿರುವ ಪೈಜಾಮು ಸೌಷ್ಠವವ ತೋರುವುದು.
ಇಳಿಬಿಟ್ಟ ಷಾರಾಯಿ ಉದ್ದಳತೆ ಹೇಳುವುದು.
ಬಳಕುತ್ತ ನಡೆಯುತಿರೆ ರಂಭೆಯೇನೊ
ಕುಳಿತದನು ಕಾಣುತಿರೆ ರಾಣಿಯೇನೊ
ಹೆರಳ ಸೌಂದರ್ಯ ಹೇಳಲೆನಗಳವಲ್ಲ.
ಮೈಯ ಬಿಳುಪಿಗೆ ಹೋಲಿಸಲು ವಸ್ತುವಿಲ್ಲ.
ಬಳಕುತ್ತ ಪಂಜಾಬಿ ಉಡುಪಿಂದ ನಡೆಯೆ
ಕಾಣುವುದು ಎದುರಿನಲಿ ನಿಜಕು ರತಿಯೇ
ಜಾತಿಮತದಡಚಣೆಯು ಮನಸಿಗೆಲ್ಲಿ?
ಹೃದಯ ವೀಣೆಯ ನುಡಿಪ ಸಂಗೀತವಿಲ್ಲ.
ಇದೆ ರೂಪದೊಳು ಸರ್ವ ಶೋಭೆಯಡಗಿಸಲು
ಬೊಮ್ಮ ಪಟ್ಟಿಹನೋ ಕಷ್ಟಗಳ ಹೀಗೆ ನಿರ್ಮಿಸಲು
ಇನಿತೆಲ್ಲವಿದ್ದರೂ ಕೊನೆಗೇನು ಗತಿಯು
ಯಾರಿಗಿದೆ ಜೀವನದಿ ಅಭಯ ಗತಿಯು.
ಕುರೂಪಿ ಯಂತೆಯೇ ಈ ಸುರೂಪಿ ಹೆಣ್ಣೂ.
ಕಡೆಗೊಮ್ಮೆ ಮುಕ್ಕಲೇಬೇಕು ಮಣ್ಣು.
ಬಳಿಕೇನು ಮೆರಸಲಿಹ? ತೋರಲಿಹೆ ಹುರುಡು
ಹೊರಳಾಡುತಿರಬಹುದು ಬರಿಯ ತಲೆಯೋಡು.



# ಮೂಕವೇದನೆ

ಜೋಲುತಿದೆ ನೋಡಿತ್ತ, ಹಣ್ಣು ಗೊನೆಯು
ಅದರಂತೆ ಶಿಥಿಲವಿದೆ ಭಾರತಿಯ ತೆನೆಯು.
ಒಂದೊಂದೆ ಬೀಳುತಿದೆ ರುಚಿ ಪಕ್ವಫಲವು
ಕಳಚಿ ಬೀಳುತ್ತಲಿದೆ ಇಲ್ಲಿ, ಬರಿದಾದ ಮನವು.

ಹಿಂದಿದ್ದ ಕೆಚ್ಚಿಂದು ಇಲ್ಲವಾಗಿಹುದು
ಶಾಂತಿ ನಾಮದಿ ಮತ್ತೆ ವಿಷಾಸೆ ಉದುರಿಹುದು.
ರಾಜೀವ ರಣಮಲ್ಲ ವಂಶಜರು ಎಲ್ಲ
ರಂಗ ಭೂಮಿಯಲಿ ನರ್ತಿಸುವ ವೇಷವೆಲ್ಲ !

ಅಶೋಕ ಸಾಮ್ರಾಜ್ಯ ವೆದ್ದಿದ್ದ ಭೂಮಿಯಲಿ
ಶೋಕವೇ ಕೈಬೀಸಿ ಕರೆವುದಿಲ್ಲಿ.
ರಾಮನೇ ಶ್ರೇಷ್ಟ ನೆಂದೆನಿಸಿದ್ದ ಕಾವ್ಯದಿಂ
ರಾವಣನನೇ ಲೆಕ್ಕಿಪರು ಶ್ರೇಷ್ಟತ್ವದಿಂ,

ಶಿಷ್ಟದುಷ್ಟರ ಗಣನೆ ನಡೆದಿದ್ದ ಕಾಲವದು
ಇಂದೇಕೆ ಈ ರೀತಿ ಕಲಸಿ ಹೋಯ್ತು.
ಕಾಲ ಮಹಿಮೆಯೋ ಭಾರತಿಯ ಭಾವನೆಯೋ
ತಿಳಿಯದಾಗಿದೆ ಈ ಮೂಕ ವೇದನೆಯು.

# ಉಳಿದುದೇನು ?

ಬುದ್ಧನೇತಕೆ ಎದ್ದು ರಾತ್ರಿಯಲಿ ನಡೆದ
ಜಾಗತಿಕ ವ್ಯಾಧಿಯನು ಕಳೆದು ನಲಿಸೆ
ಜಗದ ಕತ್ತಲೆ ಕಳೆಯೆ ಕತ್ತಲೆಯ ತಾ ಸೀಳಿ
ಕಾಡಿನಲಿ ಕತ್ತಲೆಯಲೇ ಬೆಳಕನರಸೀ
ಸಂಚರಿಸೆ ವರ್ಷಗಳು, ಬೆಳಕಾಗಲಿಲ್ಲ.
ಅಂಧಕಾರದಲೆ ಬೋಧಿ ಕರೆಯಿತಾಗ.
ಮರವರಳಿ ಜ್ಞಾನವನು ನೀಡಿತ್ತು ಕರೆದು.
ಮುಗಿಯಿತದೊ ಮರದ ಮಹಿಮೆ; ಶ್ರೀಶಾರದೀಯ ವ್ಯೆಮ
ಬೋಧನೆಗೆ ತೊಡಗಿದನು ದೈವ, ಆತ್ಮ, ಜ್ಞಾನ,
ಭಾರತದಿ ಬೆಳಗಿದನು ದಿವ್ಯಮಾನ
ಆತನಿಂದಲೆ ಬೆಳಗಿ ಬಾಳಿತ್ತು ಶಾಂತಿ
ಜಗದಲ್ಲೆ ಭಾರತವು ಬೆಳಗಿತ್ತು ಶಾಂತಿ.
ಉಳಿದುದೇನೆಮಗಿಲ್ಲಿ ಬುದ್ಧನದ್ದಾಗಿ
ಪೀಳಿಗೆಯು ಕೇಳುತಿದೆ ಕುಳಿತು ಪೆಚ್ಚಾಗಿ.



# ನಮ್ಮ ಗೊಡವೆ ಬೇಡ

ಜಡಜನತೆ ಹಿಂದೀಯರೆಂದರಿಯದಿರಲಿ
ಬಡತನದಿ ಇಹರೆಂದು ಮೂಗಳೆಯದಿರಲಿ.
ಕಡುಬಡವ ನೆನಿಸಿದರು ನೋಡಲಾರನು ಅವನು
ಅಡ್ಡಾಡೆ ಬಂದನ್ಯ ತಳವೂರಲಿನ್ನು

ಕಾಡಿರಲಿ, ನಾಡಿರಲಿ, ಮುಳ್ಳು ಕಂಟಿಯೆ ಇರಲಿ
" ಅವನ ನೆಲ ಅವಗಾಗಿ " ಇದು ತಿಳಿದು ಇರಲಿ
ಅನ್ಯದೇಶದ ಉಗುಳ ಕರತಲದಿ ಆಂತೀಗ
ಬರಲು ಸಾಕೇ ಸಾಮರ್ಥ್ಯ ಅನ್ಯಗಿಲ್ಲಿ.

ಎಚ್ಚರಿಕೆ ! ತಿಳಿದಿರಲಿ ನುಗ್ಗಿದರೆ ಇನ್ನೊಮ್ಮೆ
ಸಿಗಿದು ಎಲುಬಿನ ಚೂರು ತಿಥಿಯ ಮಾಡಲಿಕೆ.
ಮಾವ ಅಳಿಯನೊಡನಿರಲಿ ; ಅಳಿಯ ಮಾವನೊಡನಿರಲಿ
ಅವರವರೇ ಎನಿತೊಂದು ಕಚ್ಚಾಡಲಿ.

ಆದರಿಷ್ಟೆ, ಭಾರತದಿ ಸ್ವಾರ್ಥಲಾಲಸೆಯಿಂದ
ನೋಡದಿದ್ದರೆ ಸಾಕು ಜತನದಿಂದ
ಕಣ್ಣೆತ್ತಿ ಕೊಂಕಿಸಲು ಕತ್ತನೀ ಕಡೆಗಾಗಿ
ಅತ್ತಕಡೆ ತೂರುವುದು ಭಾರತದ ತುಪಾಕಿ.



# ಲೋಕನೀತಿಗೆ ಕೊರಗದಿಹನೆ ಸುಖಿ ?

ಎನಿತೊಂದು ನಕ್ಕು ಮಾತನಾಡಿಸುವ ಜನರು
ಈಗ ಬಂದಿದೊ ಸುತ್ತು ನಿಲ್ಲುತಿಹರು.
ಹಿಂದೇಕೆ ಬರಲಿಲ್ಲ ವೆಂದು ಪ್ರಶ್ನಿಸಿರೆಯಾಗ
ಏನೊ ನೆಪದಿಂದ ತಲೆ ಕೆರೆದು ನುಡಿಸುವರು ರಾಗ
ಅರಿವು ಚೆನ್ನಾಗಿ ಬರುವುದುಂಟು ಬಡತನದಲಿ
ಮರೆವು ಖಂಡಿತವಾಗಿ ಸಿರಿತನದಲಿ
ಸುತ್ತೆಲ್ಲ ಬೋಧನೆಗೆ ಜನದ ಕೊರತೆಯೇ ಇಲ್ಲ
ಕಿಸೆ ಬರಿದಾಗಿ ಬಿದ್ದರೂ ಎತ್ತುವವರಿಲ್ಲ.
ಬಂದರೂ ಬರಗಾಲ ಕಾಲದಲಿ ಬಂಧುಗಳು
ಬಹರು ಕೆಟ್ಟುದನೆ ಒಸಗೆಯಿಡೆ ನಗುತ ಮುಗುಳು
ವಾಲ್ಮೀಕಿ ಶ್ರೀವ್ಯಾಸ ಗಾಂಧಿನೆಹರೂ ಶಾಸ್ತ್ರೀ
ಲೋಕಾಭಿರಾಮ ದಲಿ ತೊಡಗಿ ಕೊನೆಗೆ ಬತ್ತಿ.
ಆಡ್ಡಾಡಿ ಕತ್ತರಿಸಿ ತಲೆಯ ಸುತ್ತೆಲ್ಲ
ಒಮ್ಮೆಯೇ ಕಡಿಯುವರು ಕತ್ತು ಮತ್ತಿಲ್ಲ.
ಒಯ್ಯುವರು ಇಟ್ಟಿದ್ದ ಹಳೆಯ ಕಂತೆ
ಬಿಚ್ಚುವರು ನಡುಹಗಲು ತಮ್ಮ ಸಂತೆ.
ಎಲ್ಲವನು ಕಳೆದವನು ಇದಕಾಗಿ ಮರುಗುವನೆ ?
ಮರುಗದಿದ್ದರು ತನಗೆ; ಲೋಕನೀತಿಗೆ ಕೊರಗದಿಹನೆ



# ಕಣ್ಣಮುಂದೇನು ?

ನಮ್ಮ ದೇಶದಿ ಏಕೆ ಬಂದಿತೊ ಈ ತರಹದ ವ್ಯಾಧಿ
ಇದಕೇನು ಮಡಿ ಮದ್ದು ಇಲ್ಲವೇನೂ ಅವಧಿ.

ಅಂದು ಅಂಗ್ಲೇಯ ನಟ್ಟ ವಿಷ ವೃಕ್ಷವಿಂದು
ಫಲಿಸಿ ಹೂಕಾಯಿ ಹಣ್ಣಿ ಕಣ್ಣಮುಂದು

ನಮ್ಮವರು ಎನಿಸಿದವರಿಗೊಮ್ಮತವೆ ಇಲ್ಲ.
ಸುಮ್ಮನೆ ಹಾರ ಹಾಕಿಸಿಕೊಂಡು ಮೆರೆವರೆಲ್ಲ.

ಹಾಯಾಗಿ ಕುಳಿತಿಷ್ಟು ಯೋಚಿಸಲು ಬಾರದೆ
ನಾವಾಗಿ ಬೆಳೆಯೆ ನೈತಿಕವು ಫಲಕೊಡದೆ ?

ಬೇಕೆಂಬ ಭಾವನೆಯು ಒಟ್ಟಿನಲ್ಲಿಲ್ಲ ?
ಇದ್ದಿದ್ದರಿಷ್ಟೊಂದು ತಲೆ ಹರಟೆಯಿಲ್ಲ.

ಇರಬೇಕು ಒಂದಿಷ್ಟು ದೇಶ ಪ್ರೀತಿ
ತನ್ನವರು ಇವರೆಂಬ ಆತ್ಮಜ್ಯೋತಿ.

ದೇಶದೊಡಲಲಿ ಬಹಳ ಜಗಳವಾಡಿ
ಜೀವನದಿ ಸ್ವಾರ್ಥಕ್ಕೆ ಗೂಟ ಹೂಡಿ

ಬೇಕಾದುದಿಷ್ಟೆ ಸ್ಥಾನಮಾನ ಒಡವೆ ನಾಣ್ಯ
ಅದಕಾಗಿ ಕಲ್ಪಿಪರು ತಲೆಯಲ್ಲದಗುಮಾನ್ಯ

# ಆರ್ತನಾಗಿ ಮೊರೆಯಿಡುವೆ

ಓ ಕಲಾದೇವಿಯೇ ವಾಸಿಸೆಯ ಹೃದಯದಲಿ
ನಿನ್ನನೆನೆಯುತ ನಿನ್ನ ಆಗಮನಕೆಳಸಿ,
ಹಾರೈಸಿ ಮನನಲಿದು ಕೊಂಡಾಡುತಿಹ ನಿನ್ನ
ಭಕುತನೊಬ್ಬನ ಪೊರೆಯೆಯೇನು ಹರಸಿ ?
ಲೋಕದಲಿ ಬಾಳುತಿಹ ಜೀವರಾಶಿಗಳೆಲ್ಲ
ಎಡವುತಿವೆ ದಿನ ದಿನದಿ ಕಲ್ಲು ಮುಳ್ಳು
ಆವಬಯಕೆಯ ಹೊತ್ತು ಬಾಳುವುದೊ ನಾನರಿಯೆ
ನೀನಿಲ್ಲದಿರೆ ಜಗದಿ ಬಾಳುಹೊಲ್ಲ
ಕಡೆಗಣ್ಣ ನೋಟದಲಿ ನೀನು ದಯೆ ಹರಿಸಿದರೆ
ಜೀವನದ ದಾರಿಯಲಿ ದಿನ ದಿನವು ಬರುವ
ಸೋಲು ಬೀಳುಗಳೆಲ್ಲ ಮರೆಯಾಗಿ ನಿಲ್ಲುವುವು
ನಿನ್ನ ದಯೆಯಿದು ಅಮೃತ ಹೊಳೆಯಾಗಿ ಹರಿವ
ಕಲ್ಲ ಕರಗಿಪೆ ನೀನು, ಅವ್ಯಕ್ತ ಮಾಧುರ್ಯ
ತುಂಬಿರುವ ಸಗ್ಗಕಿಂ ಮಿಗಿಲೆನಿಸಿದ
ಸೊಗದ ಸಾಮ್ರಾಜ್ಯದಲಿ ಮಧುರತೆಯ ತೊಟ್ಟಿಲಲಿ
ತೂಗುವೆಯಾ ಸಹೃದಯ ಹೊಗಲೆಳಸಿದ
ಆವ ಜನುಮದ ಪಾಪ ಸಂಚಯದ ಕತದಿಂದ
ನಿನ್ನ ನೆಲೆಯರಿಯದೆಯೆ ಬಳಲುತಿಹರೊ
ಸಂತಸದ ಸೌಭಾಗ್ಯ ತುಂಬಿರುವ ದೇಗುಲದ
ಕದವಿಕ್ಕಿ ಏಕ ಹಹ ತೊಳಲುತಿಹರೊ
ನೀನೆ ಜೀವನವಂತೆ ಜೀವನವೆ ನೀನಂತೆ
ನಿನಗಾಗಿ ಮಾನವನು ಬದುಕ ಬೇಕು

ನೀನಿಲ್ಲದಿರೆ ಬಾಳು ಹಾಳು ಹೋಳಾಗುವುದು
ಒಡೆದ ಮಣಿಯಾಗುವುದು ಮತ್ತೇನು ಬೇಕು ?
ನೀನಿಲ್ಲದಿಹ ದೇಹ ಜೀವವಿಲ್ಲದ ಒಡಲು
ಜೀವನದ ಒಡಲ ರಸ ಮೂರ್ತಿಯೂ
ನಿನ್ನ ಪಾಡುತ ನಿನ್ನ ಚರಣ ಕಮಲದೊಳೊಂದು
ದುಂಬಿಯಾಗಿರೆ ತಾಯೆ ಎನಗರ್ತಿಯೂ
ಆರ್ತತಾಗುತ ಮೊರೆಯ ನಿಡುವೆ ನೀ ಪೊರೆಯೆಂದು
ಎನ್ನ ಹೃದಯದಿ ಬಂದು ವಾಸಿಸೆಂದು
ಗೊತ್ತು ಗುರಿಯಿಲ್ಲದಿಹ ದಿಕ್ಕೆಟ್ಟ ನೌಕೆಯೊಳು
ಕಂಗೆಟ್ಟ ಜೀವನವ ದಡಸೇರಿಸೆಂದು



# ಇದುವೆ ಜೀವನ ರಂಗ

ಇದುವೆ ಜೀವನ ರಸರಂಗ- ನವರಂಗ

ಬಾಳಿನ ಹೊಲದಲಿ ಹೊಸ ಹೊಸ ಪೈರು
ಮೂಡಲು ಬಾಳಿದು ಸುಖರಂಗ
ತನಿ ಹಣ್ಣಾಗುತ ಮುರಿ ಮುಪ್ಪಾಗಲು
ಬಾಳಿದು ಗೋಳಿನ ರಣ ರಂಗ

ಸುಖವ ರಸುತ ಮುಂದರಿಯಲು
ಎದುರಿಗೆ ಗೋಳಿನ ಕಂತೆಗಳು
ಅವನೆದುರಿಸಲಾರದೆ ಹಿಂದಿರುಗಲು
ಹೇಡಿಯ ಪದವಿಯ ಲೆಕ್ಕಗಳು

ಊರೂರಲಿ ಕೇರಿ ಕೇರಿಯಲಿ
ಸಾರುತ ಬರುವರು ಜನರು
ನಮ್ಮದೊ ನಿಮ್ಮದೊ ಒಂದೂ ಅರಿಯರು
ಹೊಗಳಿಕೆ ತೆಗಳಿಕೆ ನಾನರಿಯೆ

ಅವರಾಗುತ, ಕೆಲಸವ ನಡೆಸಿ
ತೃಪ್ತಿಯ ತೇಗನು ತೇಗುವರು
ಕೈಗೊಂಡಿಹ ದೂರಿನ ವರ್ಣನೆಯಾಗಲು
ಅವರಿಗೆ ತೃಪ್ತಿಯ ರಸರಂಗ

# "ಸಹಬಾಳ್ವೆ ಬೇಕು"

ಸಹಬಾಳ್ವೆ ನಮಗಿರಲಿ ಸಹಯೋಗ ನಮಗಿರಲಿ
ಸಹಕರಿಪ ಜೀವನದ ಸುಖ ನಮಗೆ ಬರಲಿ
ಇಂದು ಕಾಣುವ ತತ್ವ ಹಿಂದೆಯೇ ಕಂಡಿಲ್ಲಿ
ಎಂದಿಲ್ಲವೇ "ಸಹ ವೀರ್ಯಂ ಕರವಾವಹೈ"

ಅಲ್ಪವಾದರು ಹುಲ್ಲು ಜೊತೆ ಸೇರಿ ಸಹಕರಿಸೆ
ಮದ ಬಂದ ಆನೆಯನು ಕಟ್ಟಲಹುದು
ಒಂದೊಂದು ಜಲ ಬಿಂದು ಸೇರಿ ಸಹಕರಿಸಲದೊ
ದಾಟಲಾಗದ ಸಾಗರದ ರೂಪು ಬಂತು

ಮಣ್ಣು ಕಣಗಳು ಸೇರಿ ಒತ್ತೊತ್ತಿ ನಿಂತಿರಲು
ಉತ್ತು ಬಿತ್ತುವ ತಾಯಿಯಾದಳಲ್ತೆ?
ಅಲ್ಪ ವೆನಿಸಿದ್ದರೂ ದಾರಗಳು ಹಾಸು ಹೊಗೆ
ಶ್ರೇಷ್ಟವಾಗಿಹ ವಸ್ತ್ರ ಬಂತಲ್ಲವೇ ?

ಒಂದೆ ಕೈಯಲಿ ಮಾಡಲಹುದೇನು ನಮಗೆಲ್ಲ
ಚಪ್ಪಾಳೆ ಯೆರಡು ಕೈಗಳ ಯೋಗವಲ್ತೆ?
ನಮ್ಮ ಹಿರಿಯರು ಹೊಗಳಿರುವ ಈ ಮಂತ್ರ
ಇಂದು ನಮ್ಮಿಂದಲೇ ಬೆಳಗಬೇಕು.

ಹಾಡೋಣ ಮತ್ತೊಮ್ಮೆ ಕೂಡಿಸಿರಿ ಧ್ವನಿಯೊಮ್ಮೆ
ಎನ್ನಿರೈ ಎಲ್ಲರೂ ಸಹಬಾಳ್ವೆ ಬೇಕು.



# ಬಾ ಇಲ್ಲಿ, ಹೇಳುವುದ ಕೇಳು

‘ ಅವನೇಗತಿಯಿನ್ನು ’ ಎಂದು ಕೈಮುಗಿಯೆ
ಮಿಂಚಿದನು ಮನದಲ್ಲಿ ನನ್ನ ಕಾಯೆ
ಇನ್ನೇನು ಗತಿಯೆಂದು ದೀನ ಪ್ರಶ್ನಿಸಲು
ಹೇಳಿದರು. “ ಬಾ ಇಲ್ಲಿ ಹೇಳುವುದ, ಕೇಳು ”

ವ್ಯರ್ಥ ದುಡುಕದಿರು, ಬಾಳು ಹೊನ್ನು !
ಯೋಚಿಸಲು ಬೇಡ ಭಜನೆ ಚೆನ್ನು !
“ ದೇವನಿಗೆ ಅರ್ಪಿಸೆಲ್ಲವ ಒಳಿತು ಕೆಡುಕು
ತಿಳಿದು ಎಸಗದಿರು ಎಂದೆಂದು ಕೆಡುಕು ”

ಮನಸಿನಾಳದಲಿ ಕ್ರಾಂತಿಯುದ್ಭವಿಸೆ,
ಇನ್ನೇನುಗತಿಯೆನಲು–“ ನಾನೆ ಕರೆವೆ ”
ಎಂದಿತ್ತ ಅಭಯದಿಂದಲೆ ಬದುಕು ಮತ್ತೆ
ಇಂದಿದೋ ನೋಟದಲಿ “ ಸಾಯಿ ” ಕಾಣುತ್ತೆ

‘ ಅವನೆ ಕೈ ಯಿತ್ತು ಕಾಯುವನು ಎಂದೆಂದು ’
ಎಂಬ ಮಾತಿನ ಸತ್ಯ ಅವನ ಕಂಡಂದು
ಶಾಂತಿಗಾಗಿಯೆ ಜಗವು ಪರಿತಪಿಸುತಿರಲು
ದೇವ ಬಂದಿಹನು, ಬೇಡ ಮೌಢ್ಯ ತುಂಬಿದ ಅಳಲು

# ಮಾನವತೆ ಸಾಕು ಎನಗೆ

ಇನ್ನಾದರೂ ಬಂದು ಸವಿನುಡಿಯನಾಡೆಯಾ
ಮಮ ಹೃದಯವನ್ನಿಷ್ಟು ಸಂತೈಸಲಾರೆಯಾ ?

ಮಾಡಿದೆನು ತಪ್ಪು; ಪಡುವೆ ಪಶ್ಚಾತ್ತಾಪ
ಬಳಿಕೇಕೆ ತಾಳುತಿಹೆ ನನ್ನಲ್ಲಿ ಕೋಪ

ನಾನೇಕೆ ಜೀವಿಸಲಿ ನಿನಗು ಹೊರೆಯಾಗಿ
ಏತಕೆನ್ನೊಳು ನಿಂತೆ ಎದೆಯೊಳಗೆ ಅಡಗಿ

ಸಿಡಿದೆದ್ದು ಚೂರಾಗಿ, ಪ್ರಾಣ ವಾಯುವೆ ಹೊರಗೆ
ಬಾರೊಮ್ಮೆ ಬಾ, ನಿನ್ನ ಕಳುಹಿಕೊಡುವೆ

ಬೇಡದೊ ಬೇಡ. ಈ ಬರಿಯ ಜೀವನವು
ನನಗೇಕೆ ಈ ಬರಿಯ ಬಯಲಾಟವು

ನಿನಗೆನ್ನೊಳಿನಿಸು ಮುನಿಸಾದರೆನಗಾರು
ಚೆಲ್ನುಡಿಯ ನುಡಿದು ಸಂತೈಸುವವರು.

ಇದೊ ನಾನು ಕೈಯೊಡ್ಡಿ ಬೇಡುವೆನು ಕಳುಹೆನ್ನ
ಎನಗೆ ಸಾಕಿದೊ ಹೆಮ್ಮೆಯಾ ಮಾನವತೆ ನಿನ್ನ



# ಬನ್ನಿ - ಒಂದಾಗಲು

ಮನೆಯಿಂದ ಒಂದು ದನಿ ಕೇಳಿಸಿತು ಹೊರಗೆ
" ಇಂದು ಏಕಾದಶಿ ಹೊಡೆಯ ಬಹುದಲ್ಲ ಗೊರಕೆ"
ತಿನಲುಣಲು ಬೇಕಷ್ಟು ಇದ್ದಾಗ ಈ ವ್ರತವು
ಈಗ ಹಸುಗೆಯಲಿ ವ್ರತವೇಕೆ ಎಂಬ ಮತವು

ಆಹಾರ ಇರಲಿ ಅಭಾವವೇ ಮುತ್ತಿರಲಿ
ಭಾರತಿಯ ಹರಕೆ ಅದೆಂತು ಪೊಳ್ಳಾಗಲಿ
ಆರ್ಷೇಯ ಪಂಥವನು ನೀಚ ಕಾಮನೆಯಿಂದ
" ನೋಡಬಹುದೇ ಹೇಳಿ " ತಿಳಿಸವರು ನೀವು

ಸನಾತನದ ಮುದ್ರೆಯನು ಒತ್ತಿರುವ ಮೇಲೆ
ಅಲಸಿಕೆಯ ನೆವದಿಂದ ಸುಮ್ಮಗಿರಬಹುದೆ?
ಆದೆ ಕಲ್ಪ; ವ್ರತನಿಯಮ ಆಚರಣೆಯನ್ನು
ಜೀವನದಿ ರೂಪಿಸಲು ತೊಡುವ ಪಣವನ್ನು

ನಾವೆಲ್ಲರೊಂದಾಗಿ ಸಂಸ್ಕೃತಿಯನುಳಿಸೆ
ಪಣತೊಡುವ ಉದ್ಧಾರ ಶಕ್ತಿಯನು ಉಳಿಸೆ
ಆಚಾರ ಆಹಾರ ಸಂಯಮವ ಸಾಧಿಸಲು
ಆರ್ಷೇಯ ಕುಲದವರೆ ಬನ್ನಿ-ಒಂದಾಗಲು



# ಭವ್ಯ ಭಾರತ ನಿರ್ಮಾಣ

ತುಂಬಿಹುದು ಮನದಲ್ಲಿ ಭಾರಿ ಅಳಲು
ಕಾಣದಿದೆ ದಾರಿಯದು ಹೊರಗೆ ಬರಲು
ಸುತ್ತೆಲ್ಲ ಕವಿದಿಹುದು ಮೋಡ ಜೊತೆ ಮಂಜು
ಮುಂದಿರುವ ಜೀವನವು ಉರಿಯದಿಹ ಪಂಜು

ನಾಲ್ದೆಸೆಗಳಿಂದಲೂ ಕುಳಿತಿಹರು ಕಾದು
ದಿನ ಬಿಡದೆ ವಾರ್ತೆಯಲಿ ಬರುವುದನು ಓದು
ತೂರಿಕೊಳ್ಳಲು ಸಂಧಿ ಕಾಣಿಸುವುದೇ ಎಂದು
ಹೊಂಚುತ್ತ ಕುಳಿತಿಹರು " ಬಿಕ್ಕಟ್ಟೆ ಇಂದು "

ಬರುತಿರಲಿ ಭಯವಿಲ್ಲ; ಒಗ್ಗಟ್ಟು ಇರಲಾಗ
ಮೇಲೆತ್ತಿ ಬಂದರದೊ ಹಾಕುವರು ಲಾಗ
ಬಿಕ್ಕಟ್ಟಿನಲಿ ಅಳವುಳಿದು ಮಾಡೋಣವೇನು ?
ಮತ್ತಲ್ಲಿ ಧೈರ್ಯ ಮೂಡುವುದೆಂತು ಹೇಳು ನೀನು

ಒಟ್ಟಿನಲಿ ಸದೆ ಬಡಿದು ವೈರಿ ನಿರ್ನಾಮ
ಆಗಲೇ ಬೇಕು ಭವ್ಯ ಭಾರತದ ನಿರ್ಮಾಣ.



# ಉದ್ಧಾರ ಹೇಗೆ ?

ಕನ್ನಡವು ಮನೆಮಾತು ಹೇಗಾದರೂ ಸರಿಯೆ
ಕಲಿಯಲೇ ಬೇಕು ಇಂಗ್ಲೀಷ್ ಮುಂದುವರಿಯೆ
ಮನೆಯೊಳಗೆ ಬಾರದಿದೆ ಯಾರಿಗೂ ಎ.ಬಿ.ಸಿ.
ತಾನೊಬ್ಬನೇ ಓದುವನು ಎಲ್ಲರನು ಎಬ್ಬಿಸಿ 

ಎಲ್ಲಿಗೋಡುವನೀತ ಜನರ ಬೆಂಬಲವುಳಿದು
ಕೇಳಿದರೆ ಹೇಳುವನು " ಇಂಗ್ಲೀಷು ಅಳಿದು
ನಾವೆಲ್ಲ ಬದುಕೋಣ ಹೇಗೆ ಮತ್ತೆ ?
ಕನ್ನಡವು ಬದುಕಿದ್ದು ಆವರಿಂದ ಅಲ್ತೆ ?"

ಯಾರು ತುಂಬಿದರೊ ಈ ಅಜ್ಞಾನ ಇವಗೆ
ಈ ಮನುಜ ಸಾಯದೆ ಉದ್ಧಾರ ಹೇಗೆ?
" ಕನ್ನಡವ ಕಲಿಯುವಿಕೆ ಹೇಗಾದರೂ ಅಲ್ಲ
ಕಲಿಯಲೇ ಬೇಕು ಇಲ್ಲದಿರೆ ಜೀವನಿಲ್ಲ."

ಕನ್ನಡವ ಕಲಿತಿರುವ ಜನರೆ ನಮ್ಮವರು
ಕನ್ನಡಾಂಬೆಯ ನಿಚ್ಚ ಪೂಜಕರೇ ಅವರು



# ಸ್ಮರಣಮಾಲೆ

ಚಲನಚಿತ್ರದ ನಟನೆ, ನೀನಿಂದು ಬಂಧು
ಒಂದಿಷ್ಟು ದಯೆಗೊಂಡೆ ಹರಿಸೆ, ಜ್ಞಾನಸಿಂಧು
ನಿನ್ನೆಂದಲೇ ಹಾಡುವರು ನಾಲ್ಕು ಸೊಲ್ಲು
ನಿನ್ನ ನೋಡಲು ತವಕದಿಂ ಮಾಡುವರು ಗುಲ್ಲು
ಕಾಣಿಸಿಹೆ-ದೇವ-ನಾರದ-ಸತ್ಯ ಕರ್ಮಯೋಗಿ,
ಬೋಧಿಸಿಹೆ ಗೀತೆ-ಶಾಸ್ತ್ರವ ಏಳ್ಗೆಗಾಗಿ
ಕಣ್ಣಾರೆ ಕಂಡುದನು ನೆನೆಯುವುದು ಜನತೆ
ಕೈ ಮುಗಿವೆ ನಟನೆ; ನೀಗಿರುವೆ ನೀ ಕನ್ನಡದ ಕೊರತೆ
ಪಾಪದಿಂ ದೂರವಿಹ, ಇದೊ ಮೆಚ್ಚಿ ಹೊಗಳುವೆವು
ಅದಕಾಗಿ ನಮ್ಮೆದೆಯ ಆಳವನು ತೋರುವೆವು
ಇಂದಲ್ಲ, ಮುಂದಲ್ಲ ವರ್ಷಗಳ ಮೇಲೆ
ಎಂದೆಂದು ನಳನಳಿಸಿ ಉಳಿಯಲೀ ' ಸ್ಮರಣ ಮಾಲೆ '



# ಏನೆಂದು ತೆರಳೋಣ

ಏನಿಲ್ಲಿ ಮಂದಿರವು ಮಸಕಾಗಿ ಕಾಣುವುದು
ಏಕಿಲ್ಲಿ ಕಲೆಯೊಡೆದು ಅಳುತಿರುವುದು
ಜಕಣ ಡಂಕಣರೇನು ಶಪಿಸಿದರೆ ನಮ್ಮ
ಕಲೆಯೊಡೆದು ಹೋಯ್ತೆ ಅವರ ಹಿಂದೆ

ಅವರ ರಕ್ಷಿಸಲೆಮ್ಮ ಶಕ್ತಿಗಳವಲ್ಲ ?
ಅವರಿತ್ತ ಉಡುಗೊರೆಯನುಳಿಸಲಿಲ್ಲ ?
ಗಂಡು ಮೆಟ್ಟಿದ ನೆಲದಿ ಮ್ಲೇಚ್ಛ ಮೆಟ್ಟಿಹನೇ ?
ಉಂಡ ಮನೆಗೆರಡನ್ನು ಬಗೆದು ಹೋಗಿಹನೇ ?

ಚೆನ್ನಕೇಶವನಳಲು ಮುರಳಿ ಕೃಷ್ಣನ ಕೊಳಲು
ಭಂಗವಾಯಿತೆ ವರದೆ ಶಾರದೆಯ ಕೊರಳು
ಸೋಮನಾಥನನೆಲ್ಲಿ ಹಳೆಬೀಡ ಮನ್ಮಥನೆಲ್ಲಿ ?
ಆಯ್ತೆ ನೆಲಸಮ ನಮ್ಮ ದಿವ್ಯ ಕಲೆಯಿಲ್ಲಿ

ಏನೆಂದು ತೆರಳೋಣ ಈ ಭಗ್ನ ಮಂದಿರಕೆ
ನೋಡದಿರೆ ಪಡೆಯೋಣ ಹೇಗೆ ಹರಕೆ

# ತೂರಿಬಿಡು ಸಮತೆ ಗಾಳಿ

ಉರಿಯುತಿದೆ ಬೆಳಗುತಿದೆ ಅದೋ ಕೋಟಿ ದೀಪ
ಸ್ವರ್ಣಗರ್ಭೆಯ ಸುತರ ಪ್ರಾಣದೀಪ
ಕಿಡಿಯೊಡೆವು ಧಗಧಗಿಸಿ ಪ್ರಜ್ವಲಿಸುತ್ತಲೀ
ಹರಡಿಹುದು ನೋಡಲ್ಲಿ ಕೆರಳಿ ದೀಪಾವಳೀ
ಹೆಣ್ಣು ಗಂಡಿನ ಕೈಯ್ಯ ಮೇಲಾಟ ನಡೆಯುತ್ತ
ಪ್ರಶ್ನೆಯೊಂದದೊ ಬಂದು ನಿಂತಿಹುದು ಸುತ್ತ
ಒಟ್ಟಗಿದ್ದಿಹ ಜನತೆ ಸೀಳಾಗೆ ಹೊರಟಿರಲು
ಗುಟ್ಟಾಗಿ ಅದೊ ಏನೊ ಹೊರಟಿಹರು ತೊಡಲು
ದೀಪಾವಳೀ ಕೊಡುಗೆ ಹೀಗಾದರಿನ್ನೆಂತು
ಮುಂದಿರುವ ಹಬ್ಬಗಳ ಆಚರಣೆಯೆಂತು
ಬರ ಬಾರದೆ ಸಮ್ಮತಕೆ ಉಡುಗೊರೆಯಾಗಿ ಹಬ್ಬ
ಅಳಿಸಬಾರದೆ ಭೇದ ತಲೆಹೊಕ್ಕ ಮಬ್ಬ
ನೆಮ್ಮದಿಯ ನೀಡಿಂದು ಒಮ್ಮತದಿ ಬಾಳೆ
ದ್ವೈಧವೇ ಇರೆ ತಾಯೆ, ತೂರಿಬಿಡು ಸಮತೆ ಗಾಳಿ

# ಪೂಜೆ ಕೈಗೊಳ್ಳು

ಇದೆ ನೋಡು ದಾರಿಗನೆ, ಶಾರದೆಯಗುಡಿಯು
ಕುಳಿತು ಓದುವ ಬಾಲರೇ ಅವಳ ದಯೆಯು
ಗಳಿಗೆಗಳಿಗಳಿಗೊಮ್ಮೆ ಘಂಟೆ ಬಾರಿಸಿ ಇಲ್ಲಿ
ಜಾಗೃತಿಯ ನುಡಿಸುವರು ಲೋಕ ತಿಳಿಯೆ
ಪೂಜೆ ಮಾಡುವರಿಲ್ಲಿ ಗುರುವೃಂದ; ಹೊತ್ತಗೆಯ
ಜ್ಞಾನವರ್ಪಣೆಯು; ಪ್ರವಚನವೆ ಮಾಲೆ
ಶಿಕ್ಷೆ–ರಕ್ಷೆ ಗಳೆಂಬ ಭಟರು ಬಾಗಿಲಲಿದ್ದು
ಕಾಯುವರು ಸತತವೀ ಭವ್ಯಗುಡಿಯ
ಶಾರದೆಯ ಅರ್ಚನೆಯು ಕ್ರಮದಿಂದ ಸಾಗುವುದು
ಅದೊ ನೋಡು ತೆರೆದಿಹುದು ಗುಡಿಯ ಕದವು
ಜಾತಿ ಲೆಕ್ಕವೆ ಇಲ್ಲ ಮೇಲು ಕೀಳುಗಳಿಲ್ಲ
ಬಂದಿಲ್ಲಿ ಪಾಲ್ಗೊಳ್ಳು ಪೂಜೆ ಕೈಕೊಳ್ಳು



# ನಗುವಿನ ಹೂರಣ

ನಿನ್ನ ಹೊಸಲು ನನ್ನೆಡೆಗೆ ಹರಿಯಿತು
ಸೂರ್ಯ ಹರಿದಂತೆ ರಾತ್ರಿ
ಕಿವಿವರೆಗೂ ಬಾಯಿ ಅರಳಿತು
ನಗುವಂತೆ; ಕಂಡಿತು ಮೂವತ್ತೆರಡುಹಲ್ಲು
ಇಲ್ಲ ಅಲ್ಲಿ ಹೃದಯ ಸ್ಪರ್ಶ, ಅಸಹ್ಯ
ವಾಸನೆ ಹೊರ ಹೊಮ್ಮಿತು ಬಾಯಿಂದ ಹೇಗೊ
ಹೃದಯ ದಂತ ರಾಳದಿಂದಲೂ
ಅನಿಸಿದ ನಗು, ನಗುತಲಿ ನುಂಗಿತು
ನಗುವಿನ ಎದುರಿದ್ದ ನನ್ನ ಸರ್ವಸ್ವ
ಮಾರಣ ನಗು ಹೂರಣ ನಗು
ಅದೊ ಸಿದ್ಧವು ಮಸಣದ ಭಕ್ಷ್ಯ
ರಾವಣ ನಕ್ಕ ಸೀತೆಯ ಎದುರು
ಭಸ್ಮಾಸುರನೂ ನಕ್ಕ-ಮೋಹಿನಿ-ಮೋಹಿಸಿ
ನಕ್ಕಳು ಹಿಡಿಂಬೆ-ಶೂರ್ಪಣಖಿ ಇನ್ನೇನು
ಬಕಾಸುರನೂ ನಗುತಲೆ ಎದ್ದ-ಬಿದ್ದ
ನಕ್ಕವರುಳಿವರೇ ನಗಿಸಿದರುಳಿವರೇ ?
ಬೇಕು ನಗು ಎನುವವರದು ಶಾಶ್ವತವೇ ?

# ಬೇಲಿ

ಒಂದೊಂದು ದಾರಿಯಲಿ ಇಟ್ಟಿಹರು ಅಡ್ಡಗಲ್ಲು
ದಾಟಲಾಗದು; ಹಾರುವುದು ತಿಳಿಗೇಡಿತನ?
ಒಳಗೆ ಲಟ್ಟಣಿಗೆ ಶಬ್ದ ಹೊರಗಿಂದ ನೋಡಲಾದೀತೇ?
ಸುತ್ತಲೂ ಹಾಕಿಹರು ಬಿದಿರಿಂದ ಮಾಡಿಹ ತಟ್ಟಿ
ಹುಲುಸಾಗಿ ಬೆಳೆದ ಬೆಳೆಗೆ ಸುತ್ತಲೂ ಹಾಕಿಹರು
ಮುಳ್ಳು ಕಂಟೆಯ ಕೋಟೆ
ಅರಮನೆಯ ವೈಭವದ ಕಾಲವೊಂದಿತ್ತಷ್ಟೆ
ಅಂದು ಕಲ್ಲಿನ ಭದ್ರ ಆವಾರ-ರಕ್ಷಣೆಗಾಗಿ
ಒಳಗೆ ಏನು ಮಾಡಿದರೂ ಹೊರಗರಿಯುತಿರಲಿಲ್ಲ.
'ಸತಿ' ಗೆ ಬೇಲಿಯ ಹಾಕಿದರು ಶೀಲಸಂವರ್ಧನೆಗೆ
ಕರಿಮಣಿ ಕಾಲುಂಗುರದ ಈ ಬೇಲಿ
ಸೂಳೆಯ ಶೃಂಗಾರದ ಆಭರಣತೆಯ ಹೊಂದಿದರೆ!
ಕಾವ್ಯ ಕನ್ನಿಕೆಯು ವೃತ್ತ ಛಂದಸ್ಸುಗಳ ದಾಟಲಾಗದೆಂದರು
ಅವಳೆಲ್ಲಿ ಕೇಳುವಳು ಸ್ವಚ್ಛಂದ ವೃತ್ತಿ?
ಉದ್ದವೆಷ್ಟೊ ಇಹುದು ಅಕ್ಕ ಪಕ್ಕ ಸಂಕೋಚ
ವಾಹನಗಳಿಗೆ ನೀಡಿರುವ ಬೇಲಿಯಿದು
ಇದನು ದಾಟಿದ ವಾಹನದ ಗತಿ?
ಚರಂಡಿಯ ಕೆಸರು, ಮರಗಳಪ್ಪುವಿಕೆ
ಬೇಲಿದಾಟಿದ-ತಪ್ಪು



# 'ಕ್ಷೋಭೆ - ಶಾಂತಿ'

ಮಾನಸ ಶಾಂತಿಯ ನರ ಸುತ ನಡೆಯಲು
ಎಲ್ಲಿಗೊ ಕಾಲ್ಗಳು ದೂಡಿದವು
ಮನದಲಿ ಶೂನ್ಯತೆ ತುಂಬಿರೆ ಆಗ
ಅಂತರಂಗದ ಸ್ಥಿತಿಯರಿಯೆ
ಗುರಿಯದು ಎಲ್ಲಿ? ಪಯಣವು ಎತ್ತ?
ಎಂಬುದನೊಂದೂ ತಿಳಿಯದಿಹೆ
ಮನದಲಿ ಮೊಳಗಿದ ನಾದದ ಮಧುರತೆ
ಸೆಳೆದಳು ನನ್ನನು ಚಿತ್ರವತೀ
ಬಾಲಯೋಗಿಯ ಸಾಯಿ ಮಹಾತ್ಮನ
ಕಾಣಲು ತವಕದಿ ಮುಂದಾದೆ.
ಭಾಗವತದಲೂ ಭಾರತದಲ್ಲಿಯೂ
ಓದಿದ ಕೃಷ್ಣನನೇ ಕಂಡೆ
ಚೇತನ ಮೂರುತಿ ಪಾವನ ಅಭಯವ
ನೀಡಿದ ಹಸ್ತದಿ ಮುದಗೊಂಡೆ
ಜೀವನ ನೌಕೆಯ ನಿರಾಸೆ ಜಲಧಿಯ
ಕಳಿಸಿದ ಸಾಯಿ ಕೃಷ್ಣನ ವಂದಿಸುವೆ



# ಆಶಾಕಿರಣ

ಕನ್ನಡಿಗ, ನಿಲ್ಲೊಮ್ಮೆ ಕಣ್ತೆರೆದು ನೋಡು
ನೀ ನೋದಿದಾ ಭವ್ಯ ಕನ್ನಡದ ನಾಡು
ಎಲ್ಲಿಹುದು ನೃಪತುಂಗ ಕವಿಯ ಗಡಿನಾಡು
ಪಂಪನಭಿ ವರ್ಣಿಸಿದ ಬನವಾಸಿ ನಾಡು?
ಭವ್ಯಕಲೆ ಮೈ ತಾಳ್ದ ಬೇಲೂರು ಹಳೆಬೀಡು
ಆಗಿಲ್ಲವೇ ನೋಡು ಮರಳ ಕಾಡು!
ಚಿನ್ನರನ್ನದ ರಾಶಿ ಹಾಕಿ ಮಾರಿದ ನಗರ
ಕಣ್ಣೀರ ಹೊಳೆಯಿಂದು ಹರಿವ ನರಕ
ಹಳೆಯ ಕಾವ್ಯಗಳೆಲ್ಲ ಹೆಸರಲುಳಿದಿದೆ ನೋಡು
ಇಳಿಸು ಶೌರ್ಯದಿ ಮೊದಲು; ಕಟ್ಟುನಾಡು
ನಮ್ಮಿಂದಿನಾ ಶಿಸ್ತು, ನಮ್ಮಿಂದಿನಾ ಗತ್ತು,
ನಮಗೀಯಲಾರದೇ ನೈಜ ಸಂಪತ್ತು?
ನೀನೆ ಮುಂದಾಗು ಭಾರತದ ವೀರ
ನಿಲಿಸು ಈ ಐಕ್ಯವನು ಎಂದೆಂದು ಧೀರ
ನಿನ್ನ ನಡೆ ನಿನ್ನ ನುಡಿ ನಿನ್ನ ಬಾಳ್ವೆಯ ರೀತಿ
ಬರಲಿಹುದು ಭಾರತಕೆ ಸಂತಸದ ಖ್ಯಾತಿ



# ಬನ್ನಿ - ಒಂದಾಗಲು

ಮನೆಯಿಂದ ಒಂದು ದನಿ ಕೇಳಿಸಿತು ಹೊರಗೆ
ಇಂದು ಏಕಾದಶಿ ಹೊಡೆಯಬಹುದಲ್ಲ ಗೊರಕೆ
ತಿನಲುಣಲು ಬೇಕಷ್ಟು ಇದ್ದಾಗ ಈ ವ್ರತವು
ಈಗ ಹಸುಗೆಯಲಿ ವ್ರತವೇಕೆ ಎಂಬ ಮತವು
ಆಹಾರ ಇರಲಿ ಅಭಾವವೇ ಮುತ್ತಿರಲಿ
ಭಾರತಿಯ ಹರಕೆ ಅದೆಂತು ಪೊಳ್ಳಾಗಲಿ
ಆರ್ಷೇಯ ಪಂಥವನು ನೀಚಕಾಮನೆಯಿಂದ
" ನೋಡಬಹುದೇ ಹೇಳಿ " ತಿಳಿದವರು ನೀವು
ಸನಾತನದ ಮುದ್ರೆಯನು ಒತ್ತಿರುವ ಮೇಲೆ
ಅಲಸಿಕೆಯ ನೆವದಿಂದ ಸುಮ್ಮಗಿರಬಹುದೆ ?
ಅದೆ ಕಲ್ಪ; ವ್ರತನಿಯಮ ಆಚರಣೆಯನ್ನು
ಜೀವನದಿ ರೂಪಿಸಲು ತೊಡುವ ಪಣವನ್ನು
ನಾವೆಲ್ಲರೊಂದಾಗಿ ಸಂಸ್ಕೃತಿಯನುಳಿಸೆ
ಪಣತೊಡುವ ಉದ್ಧಾರಶಕ್ತಿಯನುಳಿಸೆ
ಆಚಾರ ಆಹಾರ ಸಂಯಮವ ಸಾಧಿಸಲು
ಆರ್ಷೇಯ ಕುಲದವರೆ ಬನ್ನಿ–ಒಂದಾಗಲು



# ಪುಷ್ಪ ಪ್ರದರ್ಶನ

ಸ್ವರ್ಗಗಳ ನೂರೆಂಟು ಚಿತ್ರಣವದೇಕೆ
ಪ್ರತ್ಯಕ್ಷ ನೋಡಿದರೆ ಓದಬೇಕೆ ?
ಬನ್ನಿರಿಲ್ಲಿದೊ ಹರಡಿ ಇಟ್ಟಿರುವ ಹೂವ
ನೋಡುತ್ತ ಬಯಸದಿರಿ ಹೆಡೆ ಬಿಟ್ಟ ಹಾವ
ವರ್ಷಕ್ಕೆ ಒಮ್ಮೆ ಈ ಸಂದರ್ಭ ನಮಗೆ
ಹರ್ಷಕ್ಕೆ ಹೆಮ್ಮೆ ಈ ಸಾಂಘಿಕದ ಬಗೆಗೆ
ತೋರಿಸುವ ಸಾಧನಗಳು ಹೊಸತೇನು ಅಲ್ಲ.
ನೋಡಲಿಕೆ ಗುಂಪಾಗಿ ಸಿಕ್ಕಲೊಲ್ಲ
ದಿನ ರಾತ್ರಿ ದುಡಿದಿರುವ ಆಳುಗಳಿಗೆ
ಅರ್ಪಿಸುವ ' ಧನ್ಯ ' ಕೊನೆಯುಗಳಿಗೆ
ಹೇಳಿಲ್ಲ; ಈ ಸೌಂದರ್ಯಕ್ಕೆ ಕಾರಣನಾದವಗೆ
ಮರೆತವನ ಅಧ್ಯಕ್ಷ ಎಂತು ಉಸಿರಾಡುವವಗೆ
ಜನತೆಯಿಂದಲಿ ಬಂದ ಪ್ರಶ್ನೆಯೊಂದು
ಉತ್ತರವ ಬಯಸಿಹರು ಹೇಳಿಯೆಂದು
ಇಂದೇನೊ ತೋರಿದಿರಿ ಹಣ್ಣು ಹೂಗಳನ್ನು
ದೇವನಿಗೆ ಹೇಳಿದಿರೆ ವಂದನೆಗಳನ್ನು ?

(ಫಲಪುಷ್ಪ ಪ್ರದರ್ಶನದ ಸ್ಫೂರ್ತಿ)



# ಆತ್ಮ ಶಕ್ತಿ

ವ್ಯಥೆಯೇಕೆ ಜೀವನದಿ ಆತ್ಮಶಕ್ತಿಯು ಇರಲು,
ನಂಬಿದರೆ, ಲೋಕವನೆ ಜಯಿಸಬಹುದು
ಒಬ್ಬನಿಗೆ ಇನ್ನೊಬ್ಬ ಎಷ್ಟು ಕೊಡಬಲ್ಲ?
ಕೊಟ್ಟರೂ ಜೀವನಕೆ ಸಾಲದಲ್ಲ!
'ಭೂ' ತಾಯಿ ಯಷ್ಟಗಲ ಇನ್ನಾರು ಇಲ್ಲ!
ಎಲ್ಲಿ ನಡೆದರು ನಮ್ಮ ಬಿಡದೆ ಕಾಯುವಳಲ್ಲ!
ಸಾಯಲಿಕೆ ಒಂದೂರು ಬದುಕಲಿಕೆ ನೂರೂರು!
ಬದುಕು ನಗುನಗುತ ಭಾರಿ ಜಯವು
ನಗುವಂತ ರಾಳದಲಿ ಅಡಗಿರುವ ನೋವ
ಆರು ಸಹಿಸುವರೊ ಅದೆ ಆತ್ಮನಾತ್ಮೀಭಾವ!
ಇರಬೇಕು ಸ್ವಾಯತ್ತ ಆತ್ಮಶಕ್ತಿಯಲಿ
ಇದ್ದರಾಗಲೆ ಜನರು ಮಣಿಯುವರು ಅಲ್ಲಿ
ಕೊಟ್ಟು ಬದಕಲು ಬಹುದೆ; ಬಿಟ್ಟು ಬದುಕಲು ಬಹುದೆ
ಧೈರ್ಯ ಆತ್ಮನಲಿರಲು ಬದಕು ಸೋಲೇ?



